ಶ್ರೀಗುರುಗೋವಿಂದ ವಿಠಲಾತ್ಮಕ
ಶ್ರೀ ಪಂಢರಿನಾಥವಿಠಲ ಪ್ರಸನ್ನ ॥



# ಗುರುಭಕ್ತಿಮಾಲಾ

ದೇವರ ನಾಮಗಳು

**1984**

"ಪಂಢರಿನಾಥ ವಿಠಲದಾಸ"

ಶ್ರೀಗುರುಗೋವಿಂದ ವಿಠಲಾತ್ಮಕ
ಶ್ರೀ ಪಂಢರಿನಾಥವಿಠಲ ಪ್ರಸನ್ನ ॥



# ಗುರುಭಕ್ತಿಮಾಲಾ

ದೇವರ ನಾಮಗಳು

**1984**

"ಪಂಢರಿನಾಥ ವಿಠಲದಾಸ"

# " ಗುರುಭಕ್ತಿ ಮಾಲಾ "

*****

# ೧೯೮೪

*****

ಈ "ಗುರುಭಕ್ತಿ ಮಾಲಾ" ದಲ್ಲಿ
ಬರುವಂಥ ಗುರುಸ್ತುತಿಯು, ಶ್ರೀ ಹರಿವಾಯು
ಗುರುಗಳು ತತ್ವೇಶರಲ್ಲಿ ನಿಂತು ನುಡಿಸಿದಂತೆ
ನುಡಿದು, ಬರೆಸಿದಂತೆ ಬರೆಯಲಾಗಿದೆ.

ಈ "ಗುರುಭಕ್ತಿಮಾಲಾ" ಎಂಬ
ಗುರುಸ್ತುತಿಯನ್ನು, ಅಸ್ಮದ್ ಗುರುಗಳಂತರ್ಯಾಮಿ
ವಾದಿರಾಜಾಂತರ್ಯಾಮಿ, ಭಾರತಿರಮಣ ಮುಖ್ಯ
ಪ್ರಾಣಾಂತರ್ಗತ, ಲಕ್ಷ್ಮೀಹಯಗ್ರೀವಾತ್ಮಕ, ಗುರು
ಗೋವಿಂದ ವಿಠಲಾತ್ಮಕ ಪಂಢರಿನಾಥ ವಿಠಲನಿಗೆ
ಭಕ್ತಿಯಿಂದ ಸಮರ್ಪಿಸಲಾಗಿದೆ.

**ಪಂಢರಿನಾಥ ವಿಠಲದಾಸ**

# ಲೇಖಕನ ಎರಡು ಮಾತುಗಳು

ಪರಮ ಪೂಜ್ಯರೂ, ಪ್ರಾಥಃಸ್ಮರಣೀಯರೂ. ಮಧ್ವದೀಕ್ಷಾ ಧುರಂಧರರೂ ಜ್ಞಾನಭಕ್ತಿ ವೈರಾಗ್ಯ ಸಂಪನ್ನರೂ, ಸೋದೆ ವಾದಿರಾಜ ಕೃಪಾಪಾತ್ರರೂ, ಅಸ್ಮದ್ಗುರುಗಳೂ ಆದ ದಿ|| ಗುರುಗೋವಿಂದ ವಿಠಲ ದಾಸರಾಯರ ಚರಣ ಕಮಲವನ್ನು ಕೊಂಡಾಡುವ ಈ ಕೃತಿಗಳು, ಶ್ರೀ ಹರಿವಾಯು ಗುರುಗಳ ಕಾರುಣ್ಯದಿಂದ ಬಹು ಹಿಂದೆಯೇ ರಚನೆ ಯಾಗಿದ್ದರೂ, ಇದನ್ನು ಹೊರಗೆ ತರಲು ಸಾಧ್ಯವಾಗಿರಲಿಲ್ಲ. ಈಗ ಕೆಲವು ಶಿಷ್ಯರುಗಳು, ಈ ಕೃತಿಗಳನ್ನು ಹಾಡುವುದಕ್ಕೆ ಬರೆದುಕೊಡಿ ಎಂದು ಕೇಳಿದಾಗ್ಯೆ. ನಮ್ಮ ಅಸ್ಮದ್ಗುರುಗಳ ಚರಣ ಸ್ತುತಿ ಎಲ್ಲಾ ಬರೆದು ಮುದ್ರಣ ಮಾಡಿಸಿ, ಶಿಷ್ಯರಿಗಳಿಗೆಲ್ಲ ಕೊಡಬೇಕೆಂಬ ಪ್ರೇರಣೆ ಯಿಂದ, ಈಗ ಈ ಕಾರ್ಯಕ್ಕೆ ಕೈ ಹಾಕಿದೆ. ಅಷ್ಟೇ ಅಲ್ಲದೆ, ಗುರು ಸ್ತುತಿಯನ್ನು ಭಜನಾ ದಿನಗಳಲ್ಲಿ ಮೊದಲು ಹಾಡಲು ಸಹಾಯಕವಾಗು ತ್ತದೆ. ಅದಲ್ಲದೆ, ನಮ್ಮ ಕೃತಿಗಳು ಮುಂದಕ್ಕೆ ಬರಲಿ. ಜನಗಳು ಹೊಗಳಲಿ ಎಂಬ ಉದ್ದೇಶದಿಂದಲ್ಲ ಎಂಬುದನ್ನು ವಿನಯದಿಂದ ತಿಳಿಯ ಪಡಿಸುತ್ತೇನೆ,

"ಗುರು ಪ್ರಸಾದೊ ಬಲವಾನ್–ನ–ತಸ್ಮಾತ್ ಬಲವತ್ತರಃ"

ಇತಿ, ದಾಸಾನುದಾಸ

**ಪಂಢರಿನಾಥ ವಿಠಲದಾಸ**

# ಶ್ರೀ ಗುರುಗೋವಿಂದ ವಿಠಲಾತ್ಮಕ
# ಪಂಢರೀನಾಥ ವಿಠಲ ಪ್ರಸನ್ನ॥

ರಾಗ :                    ತಾಳ :

## "ಗುರುನಮನ"

(ಪೂಜ್ಯ ಗುರುಗಳಾದ ಶ್ರೀಮಾನ್ ಗುರುಗೋವಿಂದದಾಸರಾಯರು 9--5-1976ರಲ್ಲಿ, ಅಂಕಿತ ಪ್ರಧಾನ ಮಾಡಿದ ನಂತರ ಒಂದು ವಾರದಲ್ಲಿ, ಅಂಕಿತ ಸ್ವೀಕಾರ ಮಾಡಿ, ಅವರ ಚರಣ ಕಮಲ ಕೊಂಡಾಡುವ, ಪ್ರಪ್ರಥಮ ಕೃತಿ)

****

ಗುರುಗೋವಿಂದದಾಸರೇ ನಿಮ್ಮ । ಚರಣ ಕಮಲವ ಸ್ತುತಿಸುವೆ ।ಪ।
ಪರಮ ಕೃಪೆಯೊಳೀ ಮಂದನನು, ಉ।ದ್ಧರಿಪ ಭಾರವು ನಿಮ್ಮದೆ ।ಅ।

ಮಂದ ಮತಿಯೊಳು ಇಂಬುಗಾಣದೆ । ಅಂಧಕಾರದಿ ತೊಳಲುತ
ಕಂದಿ ಕುಂದುತ ಬಂದು ಪ್ರಾರ್ಥಿಸೆ । ಚೆಂದದಿಂದಲಿ ಸಲಹಿದ ॥ ॥೧॥

ಪರಮ ಭಕ್ತಿಲಿ ಪೊಂದಿ ಅಂಕಿತ । ಹರಿಗುರೂ ಕಾರುಣ್ಯದಿ
ಗುರುವು ಪೇಳಿದ ವಿಹಿತ ಮಾರ್ಗದಿ । ತ್ವರದಿ ನಡೆಯುವೆ ಮುಂದಕೆ ॥೨॥

ಪರಮಪ್ರಿಯರ ಹರಿಯತಲ್ಪರ । ಪರಮ ನೆಚ್ಚಿನ ಶಿಷ್ಯರೆ
ಭರದಿ ಸಿದ್ಧಿಯ ಪಡೆದು ಶ್ರೀಗುರು । ಹರಿಯ ಸೇವೆಯ ಮಾಳ್ಪರೆ ॥೩॥

ಚರಿಸಿ ದೇಶವ ನೌಕರೀಯಲಿ । ಸರ್ವನಿಷ್ಠೆಯ ಬಿಡದಲೆ
ಎರಗಿ ಭಕ್ತಿಲಿ ಹರಿಯಪಾದಕೆ । ಸಾರ ಗ್ರಂಥವ ರಚಿಸಿದೆ ॥೪॥

ದೇಶ ದೇಶವ ಚರಿಸಿ ಭ್ರಮಿಸಿ । ಕ್ಲೇಶ ತೋಷವ ತಾರದೆ
ದಾಸರಾಯರ ಚರಿತೆ ತಿಳಿಯುತ । ಸೂಸಿ ಗ್ರಂಥವ ರಚಿಸಿದೆ ॥೫॥

ತ್ವರದಿ ತಿಳಿದ್ವೈರಾಗ್ಯದಧನ । ಹರಿಗೆ ಸದನವ ಅರ್ಪಿಸಿ
ಬರುವ ಭಕ್ತರ ಪೋಷಿಸುತ್ತಲಿ । ನಿರುತ ಬೋಧಿಪೆ ಜ್ಞಾನವ ॥೬॥

ವರುಷ ವರುಷ ಸ್ಮರಿಸಿ ದಾಸರ । ಜರುಗಿಸೀ ಆರಾಧನೆ
ಭೂರಿ ಸಂತರ್ಪಣೆಯು ನಡೆಸುತ । ಸಾರತತ್ವವ ತಿಳಿಸುವೆ ॥೭॥

ಮರುತ ಪಟ್ಟಕೆ ಬರುವ ರಾಜರ । ನಿರುತ ಪ್ರೀತಿಗೆ ಪಾತ್ರರೆ
ವರವ ನೀಡುತ ಗರುಡ ಗಮನನ । ಗುರುತು ತೋರಿಸಿ ರಕ್ಷಿಪ ॥೮॥

ಪಂಕ ಕಳೆಯುತ ಭವ ಸಮುದ್ರದ । ಮಂಕು ಹರಿಸಲು ಜೀವಿಗೆ
ವೆಂಕಟೇಶಾಽಭಿನ್ನ ಪಂಢರಿ । ನಾಥ ವಿಠಲನ ತೋರಿದೆ ॥೯॥

### ರಾಗ : ಕಾಂಭೋಧಿ : ಝಂಪೆತಾಳ :

ಎಂತು ಪೊಗಳಲಿ ಗುರುವೆ ಗೋವಿಂದದಾಸ ।ಪ।
ಕಂತುಪಿತನೊಲಿಸುತಲಿ ಸಂತಸವ ಪಡುವ ।ಅ।

ತಂದೆ ಮುದ್ದು ಮೋಹನ್ನ । ವಿಠಲ ದಾಸಾರ್ಯರೊಳು
ಬಂದು ಪ್ರಾರ್ಥಿಸಿ ಪಡೆದ ಹರಿದಾಸ ದೀಕ್ಷೆ
ಕುಂದದಲೆ ದಿನ ದಿನದಿ । ನಂದ ನಂದನ ಸ್ತುತಿಸಿ
ಮಂದಿರವನರ್ಪಿಸಿದೆ । ತಂದೆ ಗೋವಿಂದನಿಗೆ॥ ॥೧॥

ಗುರು ಮಧ್ವರಾಯರ । ವರತತ್ವ ಶಾಸ್ತ್ರಗಳ
ಅರಿದೆ ಸಂಪೂರ್ಣದಲಿ । ಬಹು ಶ್ರದ್ಧೆಯಿಂದ
ನಿರುತ ಸಚ್ಛಾಸ್ತ್ರಗಳ । ವರ ಪುರಾಣಗಳ
ಸರಳದಲಿ ಕನ್ನಡಿಸಿ ಅರಿಯದಂತಿರುವ ॥೨॥

ಪೊರೆ ಬಂದ ಸುಜನರನು । ಕರೆದು ಉದ್ಧರಿಸುತಲಿ
ಪ್ರೊರೆವ ಸುಜ್ಞಾನಿ ಗುರು । ವಾದಿರಾಜರ ಪ್ರಿಯ
ಹರಿಸುವಿಯೊ ದುಷ್ಕರ್ಮ । ಗುರುಕೃಪಾ ಬಲದಲ್ಲಿ
ತೊರೆಸುವಿಯೊ ಲೌಕಿಕವ । ಬರಿದೆ ಬಳಲುವಗೆ ॥೩॥

ವಾಯುಮತದವರೊಡನೆ । ಯಾಯಿವಾರವಾಚರಿಸಿ
ತಾರತಮ್ಯಾದಿ ಸ್ಮರಿಸಿ । ತೋಯಜಾಕ್ಷನ ಸ್ತುತಿಸಿ
ಮಾಯದಾ ಮಮತೆಯಲಿ । ಆಯು ಕಳೆವರಿಗೆ ಉ
ಪಾಯದಲಿ ತಿಳಿ ಹೇಳಿ । ಕಾಯ ಮೋಹವ ಕಳೆವ ॥೪॥

ದೇಶ ದೇಶವ ಚರಿಸಿ । ಶ್ರೀಶನನು ಕೊಂಡಾಡಿ
ಕ್ಲೇಶಗಳ ಲೆಕ್ಕಿಸದೆ ಗೀತೆಗಳ ರಚಿಸೀ....
ಆಸಮೀರ ಮತ । ತತ್ವಗಳ ತಿಳಿಸುತಲಿ
ಭೂಸುರರ ಪ್ರೀತಿ ವಿ । ಶ್ವಾಸವನು ಪಡೆದಂಥ ॥೫॥

ತಿರುಪತಿಯ ಕ್ಷೇತ್ರಕ್ಕೆ । ಕರೆಸಿ ಬಹು ಶಿಷ್ಯರನು
ನಾರದಾಂಶರ ದಿನದಿ । ಗುರು ಮಹಿಮೆ ತಿಳಿಸಿ....
ಗುರುರಾಯಪವಮಾನ । ಹೋಮವನು ಗೈಯುತಲಿ
ಭೂರಿ ಸಂತರ್ಪಣೆಗೈದೆ । ನೆರೆದ ಸುಜನರಿಗೆ ॥೬॥

ಅರಿಯಬಲ್ಲೆನೆ ಸ್ವಾಮಿ । ಪರಿಪರಿಯ ಮಹಿಮೆಯನು
ಗುರುವರ್ಯನಾ ಪರಮ । ಮುದಡ ಜೀವೀ....
ಗರುಡವಾಹನ ಪಂ–ಢರಿನಾಥ ವಿಠ್ಠಲನ
ಚರಣಾಬ್ಜ ಭಜಿಪ ಗುರುಗೋವಿಂದ ವಿಠಲಾ ॥೭॥

**ರಾಗ : ಹಿಂದೋಳ      ತಾಳ :**

ನೋಡಿದೆ ಗುರುಗಳ ನೋಡಿದೆ ।ಪ।

ನೋಡಿದೆನು ಗುರುಗೋವಿಂದದಾಸರ ।
ಮಾಡಿದೆನು ಭಕುತಿಯೊಳು ವಂದನೆ ।
ಬೇಡಿದೆನು ಕೊಂಡಾಡಿ ಅಂಕಿತ ।
ಈಡು ಇಲ್ಲದೆ ಕೊಡುವ ಗುರುಗಳ ॥ ।ಅ.ಪ.।

ಗುರುವಿಜಯ ವೇಣುಗೋಪಾಲದಾಸರ ।
ಸಿರಿ ಸಂತತಿಯ ಶ್ರೀವರ ಮುದ್ದು ಮೋಹನರ ॥
ಕರಜರಾದ ತಂದೆ ಮುದ್ದು ಮೋಹನರ ।
ವರ ಶಿಷ್ಯ ಕಡೆಯ ಗುರು ಗೋವಿಂದದಾಸರ ॥ ॥೧॥

ಎರಡು ಸಲ ಗುರುವು ಶ್ರೀ । ಬದರಿಯಾತ್ರೆ ಸತಿಸಹಿತ ।
ಹೊರಟು ಹರುಷದಿ ಸಂದ ಫಲ ಅರ್ಪಿಸಿ....॥
ಹರಿವಾಯುರಾಜರನು ಬಿಡದೆ ಸ್ಮರಿಸುತ ಶ್ರೀ ।
ಕರಿವರದ ಕೃಷ್ಣನ್ನ ಮುದದಿಂದ ಪೂಜಿಪರ ॥ ॥೨॥

ಅಲವಬೋಧರ ಹಲವು । ಸಿರಿ ಗ್ರಂಥಗಳ ತಾನು ।
ಸುಲಭ ಸುವ್ವಾಲಿ ಪದ ರಚನೆಯಲ್ಲೀ....॥
ತಿಳಿಸಿ ಪ್ರಾಕೃತ ಭಾಷೆಯೊಳು ಬಹು ।
ಬಲದಿ ಸೇವೆಯ ಮಾಳ್ಪ ಗುರುಗಳ ॥ ॥೩॥

ಸ್ವಪ್ನ ಆಖ್ಯಾನ ಟೀಕೆ ರಚಿಸುತ ।
ಜ್ಞಾನಿ ವೇದನಿಧಿ ಕಾರ್ಯಗ್ರೈಯುತ ॥
ಮಾನ್ಯ ಗುರುಗಳ ಪ್ರೀತಿ ಪಡಿಸಿದ ।
ಘನ್ನ "ಬೃಹತಿ" ಹೋಮ ಗೈದನ ॥ ॥೪॥

ತಮ್ಮ ನೇಮವ ಬಿಡದೆ ದಿನವು ಪ್ರ ।
ದ್ಯುಮ್ನ ಪಂಢರಿ–ನಾಥ ವಿಠಲನ ।
ರಮ್ಯದೊಳು ಗುಣಗಾನ ಮಾಡುತ ।
ಹೆಮ್ಮೆಯೊಳು ಮೈಸೂರಲ್ಲಿರುವರ ॥ ॥೫॥

## 5

### ರಾಗ = ಅಠಾಣ

ಸಾಟಿಯುಂಟೇ ನಮ್ಮ ಗುರುಗೋ । ವಿಂದದಾಸರ ಕರುಣೆಗೆ ।ಪ।
ದಾಟಿಸೂವರು ಭವದ ಕೋಟಲೆ । ಪಾದ ಪಿಡಿದಿಹ ದಾಸಗೆ ।ಅ.ಪ।

ಕರುಣೆಯಿಂದಲಿ ನಾರಸಿಂಹನ ನಾಮವಿತ್ತುದ್ಧರಿಪರ ।
ಮರುತಮತ ದೀಕ್ಷೆಯನು ಅರುಹುತ । ಪರಮ ಪ್ರೀತಿಯತೋರ್ವರ ॥
ಹರಿಯನಾಮಾಮೃತವ ಸವಿಯುವ । ಪರಿಯ ತೋರಿಸಿ ಕಾಯ್ವರ ।
ಕರುಣಿ ಕಮಲಾಕಾಂತ ಸರ್ವೋ । ತ್ತಮನ ನಂಬಿರಿ ಎಂಬರ ॥ ॥೧॥

ವಾದಿರಾಜರ ಹೃದಯ ಗುಹೆಯಲಿ । ನಿಲಿಸಿ ಪೂಜೆಯಗೈವರ ।
ವೇದ ವೇದ್ಯನ ಉದಧಿಶಿಯನನ । ದಾಸ ಶ್ರೇಷ್ಠರು ಗುರುಗಳ ॥
ವೇದನಿಧಿಯನು ಸೂರೆಗೈಯಿರೊ । ಗುರುವಿನಿಂದಲಿ ಎಂಬರ ।
ವೇದವಿನುತನ ಸ್ತುತಿಪ ಮಾರ್ಗವ । ಅರುಹಿ ಕರಗಳ ಪಿಡಿವರ ॥ ॥೨॥

ಶುದ್ಧ ಭಾವದಿ ದಾಸರಾಯರ ಪುಣ್ಯ ದಿನವಾಚರಿಪರ ।
ಮಧ್ವರಾಯರ ಶುದ್ಧ ತತ್ವವ ತಿಳಿದು ತಾವಾಚರಿಪರ ॥
ಮುದ್ದುವಿಠಲನ ಮನೆಯೊಳ್ನಿಲ್ಲಿಸಿ ಭಕ್ತಿ ಪೂಜೆಯ ಮಾಡ್ವರ ।
ಹದ್ದುವಾಹನ ರುಕ್ಮಿಣೀಪತಿ ಹರಿನಾರಾಯಣದಾಸರ ॥ ॥೩॥

ದೇಶ ದೇಶವ ಚರಿಸಿ ದಾಸರ ಚರಿತೆ ಭಕ್ತಿಲಿ ರಚಿಸುತ ।
ಶ್ರೀಶಕೃಷ್ಣನ ಚರಣಕರ್ಪಿಸಿ ತೋಷದಿಂದಲಿ ಇರುವರ ॥
ನಾಶ ರಹಿತನ ನಿರ್ವಿಕಾರನ ತತ್ವವೆಲ್ಲೆಡೆ ಬೀರುತ ।
ದಾಸರಾಯರು ಶಾಂತಚಿತ್ತರು ಕಾಲ ವ್ಯರ್ಥದಿ ಕಳೆಯರ ॥ ॥೪॥

ಯಜ್ಞ ಯಾಗಾದಿಯಲಿ ಪುಣ್ಯವ ಸೂರೆ ಮಾಡಿ ಬಿಡುವರ ।
ಅಗ್ನಿ ಅಂತರ್ಗತನಿಗರ್ಪಿಸಿ ವಿಜಯಭಾರ್ಗವನೆನ್ವರ ॥
ಸುಜ್ಞ ಗುರು ಗೋವಿಂದ ವಿಠಲನೆ ಕರ್ತೃ ಎಂಬುವ ಜ್ಞಾನಿಯ ।
ಹಿಗ್ಗಿ ಭಜಿಸುವೆ ಸ್ವಾಮಿ ಪಂಢರಿ–ನಾಥ ವಿಠಲನದಾಸರ ॥ ॥೫॥

* * * * * *

## 6

**ರಾಗ : ಆರಭಿ** **ತಾಳ :**

ವಂದಿಸುವೆ ಗುರುವರರ । ಗುರುಗೋವಿಂದರ ।ಪ।
ಇಂದಿರೇಶನ ದಾಸ ಮಂದರೋದ್ಧರರ ।ಅ.ಪ.।

"ಪರಮಪ್ರಿಯ" ರ ಕೊನೆಯ ಕರಜರೆನಿಸಿಹರ ।
ಮರುತಾಂತರ್ಯಾಮಿ ನರ । ಹರಿಯ ಭಜಿಸುವರ
ವರಭಕ್ತಿಜ್ಞಾನ ವೈರಾಗ್ಯ ಭೂಷಿತರ ।
ಪುರ ಶ್ರೇಷ್ಠ ಮೈಸೂರಿ । ನಲ್ಲಿಹರ ನಿರುತ॥ ॥೧॥

ಗರುಡವಾಹನ ಲಕ್ಷ್ಮೀನಾರಾಯಣನ ।
ಗುರುತು ತೋರಿಸಿ ತರಳರನು ಪೊರೆವ ॥
ಹರಿಭಕ್ತಿ ಪ್ರಚುರಿಸುತ । ಪುರಪುರವನೇ ಚರಿಪ ।
ಗುರುವಾದಿರಾಜ ಪ್ರಶಿಷ್ಯರ ಪ್ರಿಯರ ॥೨॥

ಭೂತಳದಿ ಪ್ರಖ್ಯಾತ । ಸೋದೆ ಗುರುರಾಜರನು
ಆತ್ಮದೊಳು ಭಜಿಸುತ್ತ । ಗುರು ಕೃಪೆಯಪೊಂದೀ....
ಖ್ಯಾತಿಯಾ ಆಖ್ಯಾನ । ವ್ಯಾಖ್ಯಾನ ಮಾಡುತ್ತ
ಖ್ಯಾತರಾಗಿಹರು ಭೂತಳದಿ ಇವರಾ.... ॥೩॥

ತೀರ್ಥಕ್ಷೇತ್ರವ ಚರಿಸಿ । ಪುಣ್ಯವನು ಸಂಗ್ರಹಿಸಿ ।
ವಾತವಂದ್ಯನ ನಿಶಿದಿನವು ಸ್ತುತಿಸೇ....॥
ಪಾತ್ರರಾದವರಿಗುಪ । ದೇಶಗಳ ನೀಡುಡಲಿ ।
ಧಾತ್ರಿಯಲಿ ಗೂಢದಲಿ । ಇಷ್ಟ ಭೂಸುರರ ॥೪॥

ಪಾಮರನ ಕೈಪಿಡಿದ । ಅಪಾರ ಮಹಿಮರೆನೆ
ಕಾಮಿಯಾದವ ನಾ.... । ನೆಂತು ಕೀರ್ತಿಸಲೀ....
ಕಾಮಪಿತಪಂ–ಢರಿನಾಥ ವಿಠ್ಠಲನ
ನೇಮದೊಳು ನೆನೆವ । ಭಾಗ್ಯವನು ಇತ್ತಾ.... ॥೫॥

---

**ರಾಗ = ಕಾನಡ** **ತಾಳ :**

ಚಿಂತೆಯಾತಕೆ ಮಾಡಿಕೊಳ್ಳುವುದು । ನಿ
ಶ್ಚಿಂತೆಯಲಿ ಗುರು ಗೋವಿಂದದಾಸರ ಸೇರಿಕೊಂಬುವುದು॥ ।ಪ।
ಕಂತುಜನಕ ಶ್ರೀಕಾಂತನಂಕಿತ । ಸಂತಸದಿ ಕೊಡುವಂಥರಿರುವಾಗ ।ಅ.ಪ.।

ಸರ್ವಭಾರವ ಹಾಕಿ ಇವರಲಿ । ಪಾದ ಪಿಡಿಯುವುದು । ಭಕ್ತಿಲಿ
ಶರ್ವವಂದ್ಯನ ಪಾದ ಪೂಜಿಪ ದಾಸರೊಲಿಸುವುದೂ.... ॥
ಊರ್ವಿಯೊಳು ಉನ್ನತದಿ ರಕ್ಷಿಪ । ಗುರುವಿನಂಘ್ರಿಯ ಸ್ಮರಣೆ ಮಾಡುತ
ಸರ್ವಸಿದ್ಧಿಯ ಪಡೆದುಕೊಂಡು । ಭವವ ದಾಟುವುದು ॥ ॥೧॥

ವೇದಶಾಸ್ತ್ರ ಪುರಾಣ ಮರ್ಮವ ತಿಳಿಸಿ ಪೊರೆಯುವರು । ಶ್ರದ್ಧೆಲಿ
ಸಾಧುವಂದಿತನಂಘ್ರಿ ಕಮಲದ ನಾಮ ನೀಡುವರೂ.... ॥
ವೇದವೇದ್ಯರ ವಾದಿರಾಜರ ಕರುಣ ಪಡೆದ ಮಹಾನುಭಾವರು ।
ಆದಯಾಮಯ ಹದ್ದು ವಾಹನನಿರವ ತೋರುವರು ॥ ॥೨॥

ದಿವ್ಯ ಮಂತ್ರವು ದೊರಕಿದೊಡನೆಯೆ ಜ್ಞಾನಪುಟ್ಟುವುದು । ಶೀಘ್ರದಿ
ಸವ್ಯಸಾಚಿಯ ಸಖನದಾಸರು ಕರುಣ ಮಾಡುವರೂ.... ॥
ಭವ್ಯಭವನದ ಹಾದಿ ತಿಳಿಯಲು । ಶ್ರೇಷ್ಠ ಮಾರ್ಗವ ತೋರಿ ಗುರುಜ್ಞಾನ
ಗಮ್ಯಪಂಢರಿ–ನಾಥವಿಠಲನ । ಕೃಪೆಯ ಕೊಡಿಸುವರು ॥ ॥೩॥

❊ ❊ ❊

**ರಾಗ : ದೇಶಿ** **ತಾಳ :**

(ಅಶ್ವದಾಟೀ)

ಗುರುಚರಣ ಸ್ಮರಿಸುವೆನು । ಗುರು ಕರುಣ ಕೋರುವೆನು ।
ಗುರುವನುಗ್ರಹವಾಗಲೀ ॥ ಗುರುವನುಗ್ರಹದಿಂದ ।
ಮರುತಾಂತರಾತ್ಮಕನ ವರಕೃಪೆಯು ಎಮಗಾಗಲೀ ॥ ॥೧॥

ತಾರತಮ್ಯವನರಿತು | ವಾರವಾರಕೆ ಭಜಿಸಿ | ಮಾರಮಣಗರ್ಪಿಸುತಲೀ
ಭಾರಕರ್ತನನಾದ | ನಾರಸಿಂಹನೆ ಶ್ರೇಷ್ಠ | ದೊರೆಯೆಂಬ ಅರಿವು ಇರಲಿ ॥೨॥

ಪಂಚಬೇಧವನರಿತು | ಚಂಚಲದ ಮನ ನಿಲಿಸಿ |
ಮುಂಚೆ ಮಾಡುವ ವಂದನೇ
ಅಂಚೆ ವಾಹನ ನಮ್ಮ | ಸಂಚಿತದ ಪಾಪಗಳ |
ಕೊಂಚವಿರಿಸದೆ ಹರಿಕಳೆಯಲೀ ||೩||

ಗುರುವೆ ತಾಯಿಯು ಎನಗೆ | ಗುರುವು ತಂದೆಯು ಎನಗೆ |
ಗುರುವೆ ಮಿತ್ರನು ಬಂಧು ಬಳಗಾ....
ಗುರುಪಾದ ತೀರ್ಥವೇ | ಹರಿಪಾದ ತೀರ್ಥವು |
ವರಮುಕುತಿ ಪಡೆಯಲಿಕ್ಕೆ ||೪||

ಹರಿಯನ್ನು ಸ್ಮರಿಪಾಗ | ಗುರುವನ್ನು ಸ್ಮರಿಸಿದಿರೆ |
ಹರಿಪ್ರೀತಿ ಉಂಟಾಗ್ವುದೋ....
ಹರಿಯನ್ನು ಸ್ಮರಿಪಾಗ | ಗುರುವನ್ನು ಬಿಟ್ಟರೆ |
ಹರಿಯು ಸ್ವೀಕರಿಸಲೊಲ್ಲ ||೫||

ಗುರುವಿನಿಂದಲಿ ಗಾನ | ಗುರುವಿನಿಂದಲಿ ದಾನ |
ಗುರುವಿನಿಂದಲಿ ಅನ್ನಪಾನಾ....
ಗುರುವಿನಿಂದಲಿ ಜ್ಞಾನ | ಗುರುವಿನಿಂದಲಿ ಸ್ನಾನ |
ಗುರುವಿನಿಂದಲಿ ಕೇಳು ಜಾಣಾ ||೬||

ಗುರು ಬೇಕು ಸರ್ವರಿಗೆ | ಗುರು ಬೇಕು ಸುರರಿಗೆ |
ಗುರುಬೇಕು ಸ್ತ್ರೀಗೆ ಶಿಶುಗೇ
ಗುರುವಿಲ್ಲದಿರೆ ತಾನುವಾ.... | ನರನೆಂದು ಎನಿಸುವನು |
ಗುರುವೆ ಆನಂದತೀರ್ಥರು ||೭||

ಗುರುಕರುಣೆ ಇರುತಿರಲು । ನರರೇನು ಮಾಡುವರು ।
ಬರಿದೆ ಚಿಂತಿಸ । ಲೇಕೆ ಮನವೇ
ಹರಿಕರುಣೆ ಇರುತಿರಲು । ಗುರುಕರುಣೆ ಇಲ್ಲದಿರೆ ।
ನರಕ್ಲೇಶಕೊಳಗಾಗುವ ||೮||

ಕರ್ಮವನು ಪಟ್ಟಿಡಿದು । ಮರ್ಮವನು ಅರಿಯದಲೆ ।
ಕರ್ಮ ಮಾಡಲು ಏನು ಬಂತೂ
ಮರ್ಮದಿಂದಲಿ ಕರ್ಮ । ಸರ್ವವನು ಮಾಡುತಿರೆ ।
ಪೇರ್ಮೆಯಾಗುವುದು ನಿನಗೆ ||೯||

ಹರಿಯು ಸರ್ವೋತ್ತಮನು । ಸಿರಿಯು ಆತನ ರಾಣಿ ।
ಮರುತ ಶಿವ ಇಂದ್ರದಾಸರೂ
ಹರಿಯೆ ಕರ್ತನು ಎಂದು । ಗರುವವನೆ ತ್ಯಜಿಸುತಲಿ ।
ಸರ್ವ ಕರ್ಮವನರ್ಪಿಸು ||೧೦||

ಹರಿನಮ್ಮನಿಟ್ಟಪರಿ । ಇರುತಿರಲೊ ಮನುಜನೆ ।
ಬರಿದೆ ಚಿಂತಿಸಿ ಬಳಲ್ಯಾಕೆ
ಹರಿನಾಮ ಸೌಭಾಗ್ಯ । ಹರಿನಾಮ ಮೃಷ್ಟಾನ್ನ ।
ಹರಿಯುಪಂ–ಢರಿನಾಥವಿಠಲಾ ||೧೧||

❊ ❊ ❊

## ತತ್ವಸುವ್ವಾಲಿದಾಟಿ : ಭೈರವಿ

ವಂದಿಸುವೆ ಗುರುಗಳಿಗೆ । ಇಂದು ನಾ ಭಕ್ತಿಯಲಿ
ಕಂದರ್ಪಪಿತನಾಮವಿತ್ತೀಹರ । ಇತ್ತಿಹರ ಕರುಣೆಯಾ
ನಂದದಲಿ ನಾನು ಸ್ಮರಿಸೂವೆ ॥ ||೧||

ಮೈಸೂರು ನಗರಿಯಲಿ । ವಾಸಿಸುವ ಗುರುವರರ
ಆಶೆಯಿಂದಲಿ ಪೋಗಿ ನಾ ಕಂಡೆ । ನಾ ಕಂಡೆ ಭಕ್ತಿವಿ
ಶ್ವಾಸದಿಂದಲಿ ಚರಣ ಸೇವಿಪೆ ॥ ||೨||

ದೈನ್ಯದಿಂದಲಿ ಪೋಗಿ । ಬಿನ್ನೈಸಲಾಕ್ಷಣವೆ
ಎನ್ನ ನೀಕ್ಷಿಸುತ ಕೃಪೆಯಲ್ಲೀ ॥ ಕೃಪೆಯಲ್ಲಿ ಕೃಷ್ಣನ್ನ
ಚೆನ್ನಾಗಿ ಭಜಿಸೆಂದು ಪೇಳ್ದರು ॥ ||೩||

ಸಂಸಾರ ಸಾಗರದ । ಜಂಜಾಟದಲಿ ಸಿಲುಕಿ
ಕಂಸಾರಿ ಕೃಷ್ಣನ್ನ ಮರೆತಿದ್ದೆ । ಮರೆತಿದ್ದ ಮಾನವನ
ಸಂಶಯವನ್ನು ಹರಿಸಿದರು || ||೪||

ಕಲಿ ಬಾಧೆಯಲ್ಲಿ ಸಿಲುಕಿ । ಮಲಿನನಾಗಿದ್ದವನ
ಕುಲಕೆ ಪಾತ್ರನ್ನ ತಾ ಮಾಡಿ । ತಾ ಮಾಡಿ ಕೃಪೆಯಲ್ಲಿ
ಗೆಲಿಸಿದರು ಎನ್ನ ಬಲದಲ್ಲಿ || ||೫||

ಶಾಂತ ಮೂರುತಿ ಪಾದ । ಕ್ರಾಂತನಾಗಿಹೆ ನಾನು
ಶ್ರಾಂತನಾಗದೆ ನಿತ್ಯ ಭಜಿಸೂವೆ । ಭಜಿಸುವೆ ದಾಸ ಮ
ಹಾಂತ ಕೊಡಲೀ ಸಂತಸವೆ || ||೬||

ಉಪದೇಶವಾಯ್ತು ಪಂ । ಢರಿನಾಥ ವಿಠಲನ್ನ
ಅಪರೂಪ ನಾಮ ವೆನದಾಯ್ತು || ಎನದಾಯ್ತು ಇದ್ದಂಥ
ಪಾಪದ ರಾಶಿಯು ದೂರಾಯ್ತು ॥ ||೭||

## "ಭಾಮಿನಿ ಷಟ್ಪದಿ"

ರಮ್ಯಗತಿ ಪಾದಾಂಘ್ರಿ ಭಜಕರ ।
ನಮ್ಮ ಗುರುಗಳ ಪದಕೆ ವಂದಿಸಿ ।
ಹೆಮ್ಮೆಯಿಂದಲಿ ಅವರ ಚರಿತೆಯ ಪೇಳ್ವೆ ತಿಳಿದಷ್ಟು ॥
ಬೊಮ್ಮಪಿತ ಚರಣಾಬ್ಜದಾಸರು ।
ಒಮ್ಮೆ ನದಿ ಇದ ಕೇಳಿ ಸುಖಿಪುದು ।
ಈ ಮಹಾ ಹರಿದಾಸರಾಯರ ನಿತ್ಯಸ್ಮರಿಸುವುದು ॥ ||೧||

ತಂದೆ ಮುದ್ದು ಮೋಹನ್ನದಾಸರ |
ರಿಂದ ಉಪದೇಶವನು ಪೊಂದುತ |
ಇಂದಿರೇಶನ ಹೊತ್ತು ಹೊತ್ತಿಗೆ ಸೇವೆಗೈಯುವರು ||
ಅಂದವಾಗಿಹ ದಾಸ ಧರ್ಮವ |
ತಂದು ಮನದೊಳು ನಿಷ್ಠೆಯಿಂದಲಿ |
ಕುಂದು ಬಾರದ ಹಾಗೆ ಆಚರಿಸುತ ಸುಖಿಸುವರು || ||೨||

ಮೂಲ ಮೂವತ್ತೇಳು ಗ್ರಂಥವ |
ಮೂಲ ಗುರುಗಳ ಕರುಣೆಯಿಂದಲಿ |
ಶೀಲ ಸದ್ಗುರುವರರು ಓದುತ ಶಾಂತಿ ಹಾಕುತಲಿ ||
ಆಲಸದೆ ಆದರರ್ಥ ತಿಳಿಯುತ |
ಕೇಳಿ ಶಾಸ್ತ್ರವ ಗುರುವು ತಾಸು |
ವ್ಯಾಲಿ ತತ್ವದಿ ರಚಿಸಿಹರು ಪ್ರಾಕೃತದಿ ಪದ್ಯಗಳ || ||೩||

ದೇಶ ದೇಶವ ತಿರುಗಿ ದಾಸರು |
ರಾಶಿ ಶ್ರೀಹರಿದಾಸರಾಯರ |
ಆಸು ಚರಿತೆಯ ಲಿಖಿಸಿ ಭಕ್ತಿಲಿ ಗ್ರಂಥ ರೂಪದಲಿ ||
ಏಸೋ ಭಕ್ತಿಲಿ ಸೇವೆ ಸಲ್ಲಿಸಿ |
ವಾಸವಾನುತ ಹರಿಗೆ ಅರ್ಪಿಸಿ |
ಕ್ಲೇಶತೋಷವ ಮನಕೆ ತಾರದೆ ಒಂದೆ ಮನದಿಹರು || ||೪||

ಮೋದತೀರ್ಥರ ಪದಕೆ ಬರುವರ |
ವಾದಿರಾಜರ ಪ್ರೀತಿಪಾತ್ರರು |
ಬಾದರಾಯಣ ಸೇವೆಗೆನ್ನುತ ಗೃಹವ ಅರ್ಪಿಸುತ ||
ಆದಯಾಮಯು ಹರಿಯ ಸೇವಿಸಿ |
ಶ್ರೀದದಾಸರು ತುಂಬು ಕರುಣೆಲಿ |
ಆದಿಮೂರ್ತಿಯ ಹಲವು ನಾಮದ ಸುಜನಕಿತ್ತಿಹರು || ||೫||

ಮಾಡುತಿಹರ ಪ್ರತಿಮ ಭಕ್ತಿಕೊಂ ।
ಡಾಡಿ ಗುರು ಶ್ರೀ ವಾದಿರಾಜರ ।
ಬೇಡಿಹರು ಕಡು ಭಕ್ತಿ ಗುರು ಸುಜ್ಞಾನ ವೈರಾಗ್ಯ ॥
ನೋಡಿ ವೃಂದಾವನದಿ ರಾಜರ ।
ರೂಢಿಗೊಡೆಯನ ದಾಸರಾಯರು ।
ಜೋಡಿ ಪಾದವ ಬಿಡದೆ ತಾನ್ಹಗಲಿರಳು ಸೇವಿಪರು ॥ ॥೬॥

ಚಂದ್ರ ಭಾಗ ತೀರವಾಸನ ।
ತಂದು ಸ್ಥಾಪಿಸಿ ಒಂದೆ ಮನದಲಿ ।
ಅಂದಿನಂದಿನ ಸೇವೆ ನಿರ್ವ್ಯಾಜದಲಿ ಸಲಿಸುವರು ॥
ಬಂದ ಭಕ್ತರ ಕರೆದು ಸನಿಹದೆ ।
ಇಂದಿರೇಶನ ಮಹಿಮೆ ತಿಳಿಸುತ ।
ತಂದುಕೊಡುವರ ಮನಕೆ ಗುರುಗಳು ತುಂಬು ಸಂತಸವ ॥ ॥೭॥

ವರುಷ ವರುಷವು ನಮ್ಮ ಗುರುಗಳು ।
ಕರೆಸಿ ಬಹು ಪಂಡಿತರ ಪ್ರೀತಿಲಿ ।
ವರ ಪುರಂದರದಾಸರಾರಾಧನೆಯ ನಡೆಸುವರು ॥
ಹರಿಯದಾಸರ ಮೇಳವಿಸಿ ಶ್ರೀ ।
ವರನ ಒಲಿಸುವ ಮಾರ್ಗ ತೋರಿಸಿ ।
ಪರಮ ಮುಖ್ಯ ಪ್ರಾಣಪತಿಗರ್ಪಿಸುತ ಮೆರೆಯುವರು ॥ ॥೮॥

ಜ್ಞಾನವೃದ್ಧರು ವಯೋವೃದ್ಧರು ।
ಸಾನುರಾಗದಿ ಶಿಷ್ಯಕೋಟಿಯು ।
ಜ್ಞಾನ ಬಲವಭಿವೃದ್ಧಿ ಪೊಂದಲು ಶ್ರಮವ ವಹಿಸಿಹರು ॥
ಕಾಣೆನಿಂತಹ ಸೌಮ್ಯದಾಸರ ।
ಮಾನನಿಧಿ ಮಧ್ವೇಶ ಪ್ರಿಯಗೆ
ಆ ನಮಿಪೆ ನಾ ಸ್ಮರಿಸಿ ಚರಣವ ತುಂಬು ಭಕುತಿಯಲಿ ॥ ॥೯॥

ಜ್ಞಾನ ಯಜ್ಞವು ಮತ್ತೆ ಗುರುಪವ |
ಮಾನ ಹೋಮವು ಬೃಹತಿ ಸಾಹಸ್ರ |
ವೇಣುಗೋಪಗೆ ಪ್ರೀತಿಯಿಂದಲಿ ರಚಿಸಿ ಅರ್ಪಿಸುತ ||
ಏನು ಬಂದರು ಬಿಡದೆ ಧೈರ್ಯವ |
ಸಾನುರಾಗದಿ ಹರಿಯ ನಂಬಿಹ |
ಜ್ಞಾನಿವರ್ಯರ ನಮ್ಮ ಗುರುಗಳ ಮಹಿಮೆ ಅಗಾಧ || ||೧೦||

ಸ್ವಪ್ನ ವೃಂದಾವನಕೆ ಟೀಕೆಯು |
ಸುಪ್ರಸಿದ್ಧದಿ ರಚಿಸಿ ರಾಜರ |
ಕೃಪೆಯನು ಸಂಪಾದಿಸಿಪ್ಪರು ಅವರ ಸೇವಿಸುತ ||
ಬಪ್ಪ ಕ್ಲೇಶವ ಹರಿಪ ಶಕ್ತರು |
ತಪ್ಪು ಮನ್ನಿಸಿ ಎಮ್ಮ ಕಾಯ್ವರು |
ಅಪ್ಪಿಕೊಳ್ಳುವೆ ಇವರ ಚರಣವ ಭಕ್ತಿ ಭಾವದಲಿ || ||೧೧||

ತೆರಳಿ ಬದರಿಗೆ ಎರಡು ಬಾರಿಲಿ |
ಪರಮ ಹರುಷದಿ ಪತ್ನಿ ಸಂಗಡ |
ಉರುತರದ ಭಕ್ತಿಯಲಿ ಶ್ರೀ ಹರಿಯನ್ನು ಸೇವಿಸುತ ||
ಸರುವ ಕ್ಷೇತ್ರಗಳನ್ನು ದರ್ಶಿಸಿ |
ಸಿರಿಯ ರಮಣಗೆ ಯಾತ್ರ ಫಲವನು |
ಹರುಷದಿಂದಲಿ ಗುರುವು ಅರ್ಪಿಸಿ ಧನ್ಯರಾಗಿಹರು || ||೧೨||

ದಾಸರಾಯರು ಏನಗೆ ಕರುಣೆಲಿ |
ಶ್ರೀಶನಂಕಿತ ಕೊಟ್ಟು ಕಳುಹಲು |
ದಾಸನೆಂಬುವ ಬಿರುದು ಪೊಂದಿದೆ ಅವರ ಕೃಪೆಯಲ್ಲಿ ||
ಸೂಸಿ ಚರಣವ ಬಿಡದೆ ಸೇವಿಪೆ |
ನಾಶವಾಗಲಿ ಇದ್ದ ದುರಿತ ಏ |
ನಾಶಿ ಪಂಢರಿನಾಥ ವಿಠಲನ ದಾಸನೆನಿಸಿದರು || ||೧೩||

**ಧ್ಯಾನಶ್ಲೋಕಃ** **(ರಾಗ : ಹಂಸಧ್ವನಿ)**

1) ಶ್ರೀ ಪಂಢರಿನಾಥ ವಿಠ್ಠಲಾಂಘ್ರಿ ಸರೋಜಯುಗ್ಮಮನಿಶಂ
ಸಂಪೂಜಯಂತಂಮುದಾ ।
ಶ್ರೀಗುರುಗೋವಿಂದವಿಠ್ಠಲನಾಮಕ ದಾಸಶ್ರೇಷ್ಠಃ ವಿಶಿಷ್ಟಗುಣೈಃ ।
ಶ್ರೀಭಾವಿಸಮೀರ ವಾದಿರಾಜ ಕೃಪಾಪಾತ್ರಂ ಭಾವಿ
ತಾರ್ಕ್ಷ್ಯೇತಿ ವಿಖ್ಯಾತಂ ।
ವಂದೆ ವೇದನಿಧಿಂ ಅಸ್ಮದ್ಗುರಂ ಭಕ್ತ್ಯಾ ವಿರಕ್ತ್ಯಾಯುತಂ ॥

2) ವಾದಿರಾಜ ಕೃಪಾಪಾತ್ರಂ । ಭಕ್ತಿ ಜ್ಞಾನ ವಿಭೂಷಣಂ ।
ವೇದನಿಧಿಂ ವೈರಾಗ್ಯಭರಿತಂ । ಗುರುಗೋವಿಂದಂಭಜೇ ॥

****

**ರಾಗ : ಮೋಹನ** **ಆದಿತಾಳ**

ಇಂಥ ಗುರುಗಳ ಕಾಣೆನೋ । ಈ ಭುವಿಯೊಳ । ಇಂಥ ಗುರುಗಳ
ಕಾಣೆನೋ ।ಪ।

ಇಂಥ ಗುರುಗಳ ಕಾಣೆ । ಶಾಂತ ಮೂರುತಿ ನಿಜ
ಅಂತರಂಗದಿ ಇಷ್ಟ । ಶಾಂತೀಶನ ತೋರಿದರು ।ಅ.ಪ.।

ಶುದ್ಧ ಸಾತ್ವಿಕರಿವರೂ । ಅಸ್ಮದ್ಗುರು । ಮುದ್ದು ಹರಿಯ ಭಜಕರೂ....
ಹದ್ದುವಾಹನನಂಘ್ರಿ ಇದ್ದಷ್ಟು ದಿನವು ಭಜಿಸಿ
ಬುದ್ಧಿಜೀವಿಗಳೆನಿಸಿ ಗೆದ್ದುಹೋದರು ನೋಡೆ

**(ದ್ರುತಃ)** ಉದ್ಧರಿಸುತ್ತಲಿ ವಿಧ ವಿಧ ಜೀವರ ।
ಬದ್ಧರ ಮಾಡುತ ಶ್ರೀ ಹರಿದಾಸ್ಯದಿ ।
ಬುದ್ಧಿ ಜ್ಞಾನವ ಬೆಳಗಿಸಿ ಮುದದರ ।
ತಿದ್ದಿದ ಖ್ಯಾತಿಯು ಈ ಗುರುವರದು । ॥೧॥

ವಾದಿರಾಜರ ಪ್ರೀಯರೂ । ನಮ್ಮಯ ಗುರು ।
ವೇದವೇದ್ಯರ ಕರಜರೂ ॥
ವಾದ ವಿವಾದ ಸಲ್ಲ । ಸಾಧುಶೀಲರು ನಿಜ ।
ವೇದ ವ್ಯಾಸರ ಕಾ....। ರುಣ್ಯಕ್ಕೆ ಪಾತ್ರರು ॥

(ದ್ರುತಃ) ವಾದಿಪ ಜನರಿಗೆ ಬೇಧ ಜ್ಞಾನವ ।
ಮೋದದಿ ತಿಳಿಸುತ ಗುರು ಮನ ಗೆದ್ದರು ।
ಶ್ರೀಧರನೊಬ್ಬನೆ ಸರ್ವೋತ್ತಮನೆಂದು ।
ಆದರದಲಿ ಅಂಕಿತವನು ಕೊಟ್ಟರು ॥ ॥೨॥

ಪತಿತ ಪಾವನರೆನಿಸಿ । ಮನ್ಮಥಪಿತ । ಕ್ಷಿತಿಪತಿಯನು ಭಜಿಸೀ....
ಹಿತವಾದ ದಾಸ ಪಂಥ । ಪಥವೊಂದೆ ಶ್ರೇಷ್ಠವೆಂದು
ಹಿತಕೋರಿ ಸುಜನಕೆ । ಸುಪಥ ಸದ್ಗತಿ ತೋರ್ದ

(ದ್ರುತಃ) ಹಿತಗುರುಗಳ ಬೇರೊಬ್ಬರ ಕಾಣೆನು ।
ಪತಿಕರಿಸುತ್ತಲಿ ಪ್ರೀತಿಲಿ ಅಲ್ಪನ ।
ಹಿತವನೆ ಬಯಸಿದ ಅತಿ ಮತಿವಂತರ ।
ಮತಿಯಿಂದಲಿ ನಾ ಸ್ತುತಿಸಲು ಅರಿಯೆನು ॥ ॥೩॥

ಭೀಮಾ ತಟದ ಧೊರೆಯ । ಭಕ್ತಿಲಿ ತಂದು ।
ನೇಮಾದಿಂದಲಿ ನಿಲಿಸಿದ
ಸೋಮಶೇಖರ ಸಖ । ಸುಗುಣಾಂತರಂಗನ
ಕಾಮವರ್ಜಿತರಾಗಿ । ಸೇವೆಯಗೈದರು

(ದ್ರುತಃ) ತಾಮರಸಾಂಬಕ ಶ್ರೀ ಮಹಿಪತಿಯನು ।
ಕಾಮಿಸಿ ನವವಿಧ ಭಕ್ತಿಲಿ ಸೇವಿಸಿ ।
ಆ ಮಹಾ ಬಾಳನು ಸಾರ್ಥಕ ಪಡಿಸಿದ ।
ಕೋಮಲ ಹೃದಯದ ಗುರು ಮರೆಯಾದರು ॥ ॥೪॥

ಕರ್ಮಯೋಗಿಗಳಿವರೂ.... । ಶ್ರೀ ಗುರುನಿಜ ।
ಮರ್ಮವನರಿತವರೂ....॥
ಘರ್ಮಗರ್ಭನ ಪಿತ ಗೋವಿಂದದಾಸರು ।
ಧರ್ಮಾದಿ ಇದ್ದು ಶಿಷ್ಯ ಕೋಟಿಯ ಬೆಳಿಸಿದರು ॥

(ದ್ರುತಃ) ನಿರ್ಮಮರು ಬಹು ಖ್ಯಾತರು ಗುರುಗಳು ।
ಒಮ್ಮನದಿಂದಲಿ ದೇಹ ವಿಸರ್ಜಿಸಿ ।
ಹೆಮ್ಮೆಯ ಅನಂತನಪುರದಲಿ ಪೊಕ್ಕರು ।
ಪಂಢರಿನಾಥ ವಿಠಲನ ಕರುಣೆಲಿ ॥ ॥೫॥

### ರಾಗ : ಬೇಗಡೆ (ಖರಹರಪ್ರಿಯ) ಆದಿತಾಳ :

ಸರಿಯಗಾಣೆನೊ ಧರಣಿಯೊಳಗಿನ್ನು । ಗುರುವರರಿಗಿನ್ನು ॥ಪ॥
ಸರಿಯಗಾಣೆನೊ ಧರಣಿಯೊಳಗೆ । ಗುರುಗೋವಿಂದದಾಸರಂಥರ
ಗುರುವು ದೊರಕಿದರೆನಗೆ ಪುಣ್ಯದಿ । ಅರಿತು ಭಜಿಸುವೆನಿವರ ಚರಣವ ।ಅ।

ಏನು ಹೇಳಲಿ ಇವರ ಕೌತುಕವ । ಗುರು ವೇದನಿಧಿಯು
ಸಾನುರಾಗದಿ ಇತ್ತರಂಕಿತವ ॥
ಶ್ರೀನಿವಾಸನ ಚರಣದಾಸರು । ಶ್ರೀನಿವಾಸನ ಮಹಿಮೆ ತಿಳಿಸುತ
ಶ್ರೀನಿವಾಸನ ಬಿಡದೆ ಭಜಿಸೆಂದು । ಜ್ಞಾನಿ ಗುರು ಪೇಳಿದರು ಇವರಿಗೆ ॥೧॥

ಕರಿಗಿರೀದಾಸಾರ್ಯರಲ್ಲಿವರೂ । ತಾವಾಗಿ ಶಿಷ್ಯರು
ಭರದಿ ಸಿದ್ಧಿಯ ಗಳಿಸಿ ಶೋಭಿಸಲೂ....॥
ಮೆರೆವ ಮಧ್ವರ ಮತದ ಒಳಗೆ । ಗುರುವು ಪ್ರಾವೀಣ್ಯತೆಯ ಪಡೆಯುತ
ಚರಿಸಿ ದೇಶವ ಗ್ರಂಥ ರಚಿಸುತ । ಹರಿಯ ಪಾದಕೆ ಅರ್ಪಿಸಿದರು ॥೨॥

ವಾದಿರಾಜರ ಕರುಣ ಪಡೆದವರೂ । ಗುರುವರರು ನಮ್ಮ
ಬಾದರಾಯಣ ಬದರಿ ನೋಡಿದರು ॥
ಸಾಧುಶೀಲರು ಮೋದಭರಿತರು ॥ ಮೋದತೀರ್ಥರ ಬಿಡದೆ ಸೇವಿಸಿ
ಶ್ರೀದತಿಂಗಳ ಭಾಗ ವಿಠಲನ । ಆದರದಿ ನಿಲಿಸಿದರು ಸದನದಿ ॥೩॥

ಯಜ್ಞಯಾಗಾದಿಗಳ ಮಾಡಿದರು । ಗುರುಭಗ್ನವಿಲ್ಲದೆ
ಮಗ್ನರಾಗುತ ಇರಳು ಹಗಲಲ್ಲೂ ॥
ವಿಘ್ನನಾಶಕನಂತರ್ಯಾಮಿಯ । ಸುಜ್ಞ ಗುರುಗಳ ಭಜಿಸಿ ಭಕ್ತಿಲಿ ।
ತಜ್ಞರೆಂದೆನಿಸುತ್ತ ಮೆರೆದರು । ವಿಘ್ನವಿಲ್ಲದೆ ಬಾಳಿನ್ಹಾದಿಲಿ ॥ ॥೪॥

ಶಿಷ್ಯಕೋಟಿಯ ಬೆಳಸಿ ಭುವಿಯೊಳಗೆ । ನಿಜ ಶಿಷ್ಯ ಗುರುವಿಗೆ
ಶಿಷ್ಯರೆಂದರೆ ಪ್ರಾಣ ಗುರುವರಗೇ....॥
ಶಿಷ್ಯರೆಲ್ಲರ ಕೂಡಿ ಹಾಕುತ । ವರ್ಷ ವರ್ಷವು ನಡೆಸರಾಧನೆ ।
ಶಿಷ್ಯಕೋಟಿಯ ಜ್ಞಾನ ಹೆಚ್ಚಿಸಿ । ತುಷ್ಟಿಯನು ಪಡೆದಂಥ ಮಹಿಮಗೆ ॥೫॥

ಜ್ಞಾನ ಭಕ್ತಿ ವಿರಕ್ತರೆಸಿದರೂ....। ನಾನೆಂತು ಪೇಳಲಿ
ದೀನದಾಸನು ಚರಣ ಸ್ಮರಿಸುವೆನೂ ॥
ಏನು ಬಂದರು ಬಿಡದೆ ಧೈರ್ಯವ । ಸಾನುರಾಗದಿ ಹರಿಯ ನಂಬಿದ
ಜ್ಞಾನಿವರ್ಯರ ಪರಮ ಕರುಣೆಯ। ಜ್ಞಾನ ರಹಿತನು ಹ್ಯಾಗೆ ಸ್ತುತಿಸಲಿ ॥೬॥

ಎಂತು ತೀರಿಸಲಿವರ ಉಪಕಾರ। ಶ್ರೀಕಾಂತಭಕ್ತರ
ಚಿಂತಿಸುತ್ತಲಿ ಕಳೆವೆ ಕಾಲಾವ ॥
ಅಂತರಂಗದಲಿಪ್ಪ ಪಂಢರಿ । ನಾಥ ವಿಠಲನ ಚಿಂತಿಸುತ್ತಲಿ ।
ಚಿಂತೆಯಿಲ್ಲದೆ ಬಿಟ್ಟು ದೇಹವ । ನಂತಪುರದಲ್ಲಿ ಸೇರಪೋದರು ॥

*****

# ಪರಮಪೂಜ್ಯರಾದ ಅಸ್ಮದ್ ಗುರುಗಳಾದ ಶ್ರೀ ಗುರುಗೋವಿಂದ ವಿಠಲದಾಸರಿಂದ ಶಿಷ್ಯರಿಗೆ ದತ್ತವಾಗಿರುವ ಅಂಕಿತನಾಮಗಳು

## ಅಂಕಿತನಾಮ

| | | |
|---|---|---|
| 1. | ವೈಕುಂಠ | ವಿಠಲ |
| 2. | ವಸುಮತೀಶ | – |
| 3. | ಭಾರತಿಪತಿನುತ | – |
| 4. | ವಾಸುಕೀಶಯನ | – |
| 5. | ಸರ್ವಾಮಯಹರಿ | – |
| 6. | ರಾಮಚಂದ್ರ | – |
| 7. | ಭೂರಮಣರಘುರಾಮ | – |
| 8. | ರಾಧರಮಣ | – |
| 9. | ಜ್ಞಾನಪ್ರದ ನರಸಿಂಹ | – |
| 10. | ಮಾಪಿನುತ | – |
| 11. | ಲಕ್ಷ್ಮೀಶ ನರಹರಿ | – |
| 12. | ಆನಂದವಾಹನ | – |
| 13. | ಶಿರಿ ಪ್ರಾಣಪತಿ | – |
| 14. | ಮಧ್ವವರದ | – |
| 15. | ಆನಂದನಿಲಯ | – |
| 16. | ಹರಿ | – |
| 17. | ಹನುಮೇಶ | – |
| 18. | ನಾರಾಯಣ | – |
| 19. | ಸಿರಿಜಾನಕೀಪತಿ | – |
| 20. | ವಾಸುದೇವಕೃಷ್ಣ | – |
| 21. | ಲಕ್ಷ್ಮೀಶಗೋವಿಂದ | ವಿಠಲ |
| 22. | ಲಕ್ಷ್ಮೀಲೋಲ | – |
| 23. | ಮನ್ಮಥಪಿತ | – |
| 24. | ಉದಯಾದ್ರೀಶ | – |
| 25. | ಗುರುಮೋಹನ | – |
| 26. | ಪದ್ಮಾವತಿ | – |
| 27. | ಹಯಾನನ | – |
| 28. | ಅಸಾಧಾರಣ | – |
| 29. | ವೆಂಕಟೇಶ | – |
| 30. | ಗೋಪಿಗೋವಿಂದ | – |
| 31. | ಸಾಮಗಾಯನಲೋಲ | – |
| 32. | ಮಧ್ವವರದ ಹಯಾಸ್ಯ | – |
| 33. | ಕರಿವರದ ಗೋಪಾಲ | – |
| 34. | ಶಿರಿನಾರಾಯಣ | – |
| 35. | ಪ್ರಾಣಗುರುಜಯ | – |
| 36. | ಆನಂದಾನಂತ | – |
| 37. | ವಿದುರವಂದ್ಯ | – |
| 38. | ಶ್ರೀಶಕೇಶವ | – |
| 39. | ರಘುಕುಲತಿಲಕ | – |
| 40. | ಅನಂತಪದ್ಮನಾಭ | – |

41. ಮಾಧವ ವಿಠಲ
42. ಉಪೇಂದ್ರ —
43. ದಧಿವಾಮನ —
44. ದಾಮೋದರ —
45. ಪ್ರದ್ಯುಮ್ನ —
46. ಗೋಪಾಲ ಹರಿ —
47. ಪ್ರಕಾಶರೂಪಿ —
48. ವರದನರಹರಿ —
49. ಜಾನಕೀಶ —
50. ಜಗದೀಶ —
51. ಗೋಪೀಶ —
52. ರಮಾವಿನುತ —
53. ಶ್ರೀರಂಗಶಾಯಿ —
54. ಖಗವರಧ್ವಜ —
55. ಲಕ್ಷ್ಮೀನರಹರಿ —
56. ಕೊನೇರಿವಾಸ —
57. ಪ್ರಾಣಪತಿಶ್ರೀನಿವಾಸ —
58. ದಾಸ ವರ ವರದ —
59. ಬದರೀನಾಥ —
60. ವಾಸಿಷ್ಠಕೃಷ್ಣ —
61. ಪ್ರಾಣಪತಿನುತ —
62. ಶ್ರೀರಂಗಶಾಯಿ —
63. ಆನಂದಾದ್ರಿವಾಸ —
64. ವಿಧಿಮಾತೆಪತಿ —
65. ಜಗತ್ಸಾರ —
66. ಹರಿನಾರಾಯಣ —
67. ಶಿರಿಮಾಧವ —
68. ಭಾರತೀಶಕಾಂತ —
69. ಜಯಶ್ರೀವೀರಹರಿ —
70. ಮುದ್ದುವೆಂಕಟ —
71. ಶ್ರೀಶ್ರೀನಿವಾಸಹರಿ —
72. ವರದಗುರುಗೋವಿಂದ —
73. ಶೇಷಪರ್ಯಂಕಶಯನ —
74. ವೇದವತಿಪತಿ —
75. ವರಗಡದಿನ್ನೀಶೇಷ —
76. ಅಮಿತಮಹಿಮೋಪೇತ —
77. ನಾರಾಯಣಾಚ್ಯುತ —
78. ಶರ್ವೇಢ್ಯಮೋಹನ —
79. ಗುರುಮಧ್ವೇಶ —
80. ಗುರುಜಗದೀಶ —
81. ಗುರುಭಾರತೀಶಪ್ರಿಯ —
82. ಮುರಳಿಮನೋಹರ —
83. ಲಕ್ಷ್ಮೀಮನೋಹರ —
84. ಶೇಷವಿನುತಸಿರಿರಾಮ —
85. ಆನಂದಗಿರಿಪತಿ —
86. ವೆಂಕಟಕೃಷ್ಣ —
87. ಉಪೇಂದ್ರಹರಿ —
88. ಸತ್ಯನಾರಾಯಣ —
89. ಮನಸಿಜಪಿತ —
90. ಪಾಂಡುರಂಗ —
91. ಋಗ್ವೇದಪ್ರಿಯ —
92. ವಿಘ್ನೇಶಪ್ರಿಯ —
93. ಹರಿಗೋಪಾಲ —
94. ನಾರಾಯಣಹರಿ —

95. ಗಿರಿಜೆಪತಿಪ್ರಿಯ –
96. ಪ್ರಾಣಗುರುಹರಿ –
97. ಸ್ವಾಮಿಗುರುಗೋವಿಂದ –
98. ವರದರಾಜ –
99. ಮಾಧವಭೂವರಾಹ –
100. ಪ್ರಾಣಪತಿಗೋಪಾಲ –
101. ಹನುಮವಂದಿತ –
102. ವೇಣುವಿನೋದ –
103. ತಿರುಮಲೇಶ –
104. ಜಯಗೋಪಾಲ –
105. ಯೋಗಿಸನ್ನುತ –
106. ಸುಂದರಾಂಗ –
107. ಅನಂತಗುಣಪೂರ್ಣ –
108. ಶ್ರೀದೇವಿಪ್ರಿಯ –
109. ಪರತತ್ವ –
110. ವೆಂಕಟಗಿರಿ –
111. ಲಕ್ಷ್ಮಿನಾರಾಯಣ –
112. ಧಾಮಶೋಭಿತ –
113. ಮೋದಪ್ರದನರಹರಿ –
114. ಗಂಗಾಜನಕ –
115. ವರಾಹಹರಿ –
116. ಸಿರಿಕೃಷ್ಣ –
117. ಶ್ರೀಹಯಗ್ರೀವ –
118. ಪುಂಡಲೀಕವರದ –
119. ಪಂಢರೀನಾಥ –
120. ವಾಸುದೇವಹರಿ –
121. ವೆಂಕಟಾದ್ರಿ –
122. ಸುಧಾಮಪ್ರಿಯ –
123. ರುಕ್ಮಿಣೀಶ –
124. ಪ್ರಾಣನುತನರಸಿಂಹ –
125. ಶ್ರೀವರದಗೋಪಾಲ –
126. ರಾಘವೇಂದ್ರ –
127. ಗೋಪಾಲಕೃಷ್ಣ –
128. ಹರಿಗೋವಿಂದ –
129. ಜಾಂಬವತಿಪ್ರಿಯ –
130. ಮೂಲಕಾರಣ –
131. ಮುರಳಿವಿನೋದ –
132. ಲಕ್ಷ್ಮಿಮನೋಜ್ಞ –
133. ಶ್ರೀಮುದ್ದುಮೋಹನ್ನ –
134. ವಿಬುಧಪ್ರಿಯ –
135. ಸರ್ಪಾದ್ರಿವಾಸ –
136. ಉರಗಗಿರಿವಾಸ –
137. ಭೂವರಾಹ –
138. ಬದರೀಪ್ರಸನ್ನ –
139. ಪ್ರವಹಸನ್ನುತ –
140. ಶ್ರೀಹರಿಪ್ರಿಯ –
141. ಕಮಲಾಲಯ –
142. ಹನುಮವರದ –
143. ಸರ್ವಾಧಾರ –
144. ಸುಖಪೂರ್ಣ –
145. ಪ್ರಾಣನರಹರಿ –
146. ಹರಿತ್ರಿವಿಕ್ರಮವ್ಯಾಸ –
147. ವೇಣುಧರ –
148. ಮನುಜಮೃಗವೇಷ –

149. ಬಾಲಕೃಷ್ಣ –
150. ಸೀತಾಪತಿಹರಿ –
151. ಪಾಂಡುರಂಗ ಹರಿ –
152. ಶ್ರೀವರಹರಿ –
153. ಶ್ರೀದರಹರಿ –
154. ಅಂಜನಾಸುತವರದ –
155. ಶ್ರೀಕರಾರ್ಚಿತ –
156. ರಾಮಕೃಷ್ಣ –
157. ಪ್ರಾಣಜಯ –
158. ಇಂದು ಭಾಗ ಹರಿ –
159. ಪ್ರಾಣ ಗುರುರಾಮ –
160. ವೆಂಕಟ ಹರಿ –
161. ಅನಂತ ಗಿರಿ –
162. ಯತಿ ಸನ್ನುತ –
163. ಪ್ರಾಣಸನ್ನುತ –
164. ಪ್ರಾಣನರಹರಿಮೋದ –
165. ಆನಂದಾದ್ರಿ –
166. ಶೇಷವಂದ್ಯಹರಿ –
167. ಮುಕುಂದಹರಿ –
168. ಮುಚುಕುಂದವರದ –
169. ಮಾಧವಸ್ವಾಮಿ –
170. ಗುರುರಾಘವೇಂದ್ರ –
171. ಹರಿಕೃಷ್ಣ –
172. ಅನಂತಶಯನ –
173. ರಮಾನಂದ –
174. ಶ್ರೀನಿವಾಸಾದ್ರಿ –
175. ಅಂತರಾತ್ಮಕ –
176. ಜಯಪಾಂಡುರಂಗ –
177. ನಾರಾಯಣಕೃಷ್ಣ –
178. ಸುಮನ ಪ್ರಿಯಗೋಪ–
179. ಪ್ರಭುಪಾಂಡುರಂಗ –
180. ಪ್ರಿಯಹಯಾಸ್ಯ –
181. ಲಕ್ಷ್ಮೀವಲ್ಲಭ –
182. ವಾಯುವಂದಿತ –
183. ಶಿರಿಮುದ್ದುಕೃಷ್ಣ –
184. ವೇದನಿಧಿಹರಿ –
185. ಲಕ್ಷ್ಮೀಶಹರಿ –
186. ಸೀತಾಮನೋಹರ –
187. ಅಚ್ಯುತಾನಂತ –
188. ಲಕ್ಷ್ಮೀನಾಥ –
189. ವೆಂಕಟನರಹರಿ –
190. ಗೋಪಿನಾಥ –
191. ಗುರುಧ್ವಜವರದ –
192. ರುದ್ರಸನ್ನುತ –
193. ಪ್ರಿಯಪಾಂಡುರಂಗ –
194. ಗುರುರಾಜನುತ –
195. ಶ್ರೀನಾಥ –
196. ಶ್ರೀಕೃಷ್ಣಹರಿ –
197. ಪವಮಾನವರದ –
198. ಪವಮಾನ –
199. ಪುಂಡರೀಕವರದಹರಿ –
200. ಶ್ರೀಪ್ರಸನ್ನ –
201. ಹನುಮನುತ –
202. ಭೂತೇಶನುತ –

203. ಮೋಹನಕೃಷ್ಣ –
204. ಪನ್ನಗಾದ್ರಿ –
205. ಮುದ್ದುಕೃಷ್ಣ –
206. ಭೀಮಾತಟದ –
207. ಕನಕಾದ್ರಿಹರಿ –
208. ತಿರುಮಲೇಶಹರಿ –
209. ಕೈವಲ್ಯಪತಿ –
210. ಶೇಷನುತಗೋಪ –
211. ರಾಘವೇಂದ್ರಹರಿ –
212. ಅಕ್ರೂರವರದ –
213. ತುಲಸಿವಂದಿತ –
214. ಗುರುಪ್ರಸನ್ನ –
215. ಲಕ್ಷ್ಮೀವೆಂಕಟೇಶ –
216. ಹರಿಗುರುಪ್ರಸನ್ನ –
217. ಕದರಿನರಹರಿ –
218. ಪರಸೌಖ್ಯಪ್ರದ –
219. ಗುರುರಾಜಹರಿ –
220. ರಂಗನಾಥ –
221. ಮುರಳಿವಿಹಾರಿ –
222. ಭೂತರಾಜನುತ –
223. ಹಯಗ್ರೀವ –
224. ಅನಂತಹರಿ –
225. ವಾದಿರಾಜಹರಿ –
226. ಲಕ್ಷ್ಮೀಶಹರಿ –
227. ರುದ್ರವಂದಿತ –
228. ಚಂದ್ರಭಾಗಹರಿ –
229. ಪ್ರಾಣಪತಿಹರಿ –
230. ಮಧ್ವವರದಕೃಷ್ಣ –
231. ಪ್ರಾಣೇಶಹರಿ –
232. ಗುರುವರಹರಿ –
233. ಪದ್ಮೇಶ –
234. ದ್ವಾರಕಾನಾಥ –
235. ವಾಜಿವದನ –
236. ಲಕ್ಷ್ಮೀಪತಿ –
237. ಲೀಲಾಮನೋಹರ –
238. ಆನಂದಗಿರಿ –
239. ಪ್ರಾಣಸನ್ನುತನರಸಿಂಹ –
240. ಆಪದ್ಬಾಂಧವ –
241. ಗುರುಪಾಂಡುರಂಗ –
242. ಬಾಲಕೃಷ್ಣಹರಿ –
243. ಭೀಮಾತಟಹರಿ –
244. ಶ್ರೀನರಸಿಂಹ –
245. ಕಮಲಾರಮಣ –
246. ರಮಾನಿವಾಸ –
247. ಶೇಷಗಿರೀಶ –
248. ಭಕ್ತಾರ್ತಿಹರ –
249. ಪ್ರಹ್ಲಾದವರದ –
250. ಶ್ರವಣಾನಂದ –
251. ಋಜುರಾಜಸನ್ನುತ –
252. ರಾಮಚಂದ್ರಹರಿ –
253. ಶ್ರೀಗೋವಿಂದ –
254. ವರಾಹಹರಿ –
255. ವಾನರವಂದ್ಯ –
256. ರಾಘವಾಹರಿ –

